## ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 465
2. ಸದಸ್ಯರ ಹೆಸರು : ಶ್ರೀ ಆರ್.ಬಿ. ತಿಮ್ಮಾಪೂರ
3. ಉತ್ತರಿಸುವ ದಿನಾಂಕ : 16-12-2021
4. ಉತ್ತರಿಸುವವರು : ಮುಖ್ಯಮಂತ್ರಿಗಳು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಬೆಂಗಳೂರಿನಲ್ಲಿ ಬಹಳ ಹಿಂದೆ ನಿರ್ಮಾಣ ಮಾಡಿರುವ ವಿದ್ಯುತ್ ಚಿತಾಗಾರಗಳು ಪ್ರಸ್ತುತ ಜನವಸತಿ ಪ್ರದೇಶಗಳ ಮಧ್ಯೆ ಇರುವುದರಿಂದ, ಶವಸಂಸ್ಕಾರದ ಹೊಗೆಯಿಂದಾಗಿ ಸಾರ್ವಜನಿಕರಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದಿಯೇ; | ಬಂದಿದೆ. |
| ಆ | ಬೆಂಗಳೂರಿನ ಬಿನ್ನಿಪೇಟೆ, ಕೆಂಗೇರಿ ಉಪನಗರ, ಬನಶಂಕರಿ ವಿದ್ಯುತ್ ಚಿತಾಗಾರಗಳು ಸೇರಿದಂತೆ ಬಹುತೇಕ ಚಿತಾಗಾರಗಳು ಕೋವಿಡ್ ಅವಧಿಯಲ್ಲಿ ಸತತವಾಗಿ ಕಾರ್ಯ ನಿರ್ವಹಿಸಿದ್ದರಿಂದ ಜನರ ಮೇಲೆ ದುಷ್ಪರಿಣಾಮ ಬೀರಿರುವುದನ್ನು ಮನಗಾಣಲಾಗಿದೆಯೇ; | ಪಾಲಿಕೆಯ ವ್ಯಾಪ್ತಿಯಲ್ಲಿ ಕೆಲವು ಚಿತಾಗಾರಗಳು ಜನವಸತಿ ಪ್ರದೇಶದಲ್ಲಿದ್ದು, ಅಸ್ವಾಭಾವಿಕ ಮರಣ ಪ್ರಮಾಣ ಹೆಚ್ಚಾದ ಸಮಯದಲ್ಲಿ ಮತ್ತು ಕೋವಿಡ್-19 ಸಮಯದಲ್ಲಿ ಆಕಸ್ಮಿಕವಾಗಿ ತುಂಬಾ ಸಾವುಗಳಾದ್ದರಿಂದ ಸತತವಾಗಿ ಚಿತಾಗಾರಗಳು ಕಾರ್ಯನಿರ್ವಹಿಸುವುದು ಅನಿವಾರ್ಯವಾಗಿದ್ದು, ಚಿತಾಗಾರದಿಂದ ಹೆಚ್ಚಿನ ಪ್ರಮಾಣದ ಹೊಗೆ ಹೊರ ಹೊಮ್ಮಿರುತ್ತದೆ.<br><br>ಬೆಂಗಳೂರಿನಲ್ಲಿರುವ ವಿದ್ಯುತ್ ಚಿತಾಗಾರಗಳಿಂದ ಹೊರ ಸೂಸುವ ಹೊಗೆಯನ್ನು ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿಯು ನಿಗದಿಪಡಿಸಿರುವ ನಿಯಮಾವಳಿಗಳಂತೆ ಸ್ಕ್ರಬ್ಬಿಂಗ್ ಮಾಡಿ ನಂತರ 100 ಅಡಿ ಎತ್ತರದ ಚಿಮಣಿಯ (ಹೊಗೆ ಕೊಳವೆ) ಮೂಲಕ ಹೊರಬಿಡಲಾಗುತ್ತಿದೆ. |
| ಇ | ಈ ವಿದ್ಯುತ್ ಚಿತಾಗಾರಗಳನ್ನು ನಗರದ ಹೊರವಲಯಕ್ಕೆ ಸ್ಥಳಾಂತರಿಸಿ, ಸಾರ್ವಜನಿಕರಿಗೆ ಅನುಕೂಲ ಮಾಡಿಕೊಡಲಾಗುವುದೇ? | ಅಂತಹ ಯಾವುದೇ ಪ್ರಸ್ತಾವನೆ ಇರುವುದಿಲ್ಲ. |

**ಸಂಖ್ಯೆ: ನಅಇ 251 ಬಿಬಿಎಲ್ 2021(ಇ)**

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ.